USQ-24/7/2019

# ಅನುಬಂಧ

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಘೋಟ್ನೇಕರ್ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 600ಕ್ಕೆ ಉತ್ತರ

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯಲ್ಲಿ ಇರುವ ಅಸಂಘಟಿತ ಕಾರ್ಮಿಕರ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ಕಾರವಾರ ಜಿಲ್ಲೆಯಲ್ಲಿರುವ ಅಸಂಘಟಿತ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ ಕಾರ್ಮಿಕ ಇಲಾಖೆ ವತಿಯಿಂದ ಯಾವುದೇ ಗಣತಿ/ಸಮೀಕ್ಷೆ ನಡೆಸಿರುವುದಿಲ್ಲ. ಆದರೆ, ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ಕಾರ್ಮಿಕರ ಕಲ್ಯಾಣ ಮತ್ತು ಸಾಮಾಜಿಕ ಭದ್ರತೆಗೆ ಸಂಬಂಧಿಸಿದಂತೆ ಹಲವಾರು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಗಳಡಿ ನಿಯಮಾನುಸಾರ ಫಲಾನುಭವಿಗಳಾಗಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ಸಂಖ್ಯೆ ಲಭ್ಯವಿದ್ದು ವಿವರ ಕೆಳಕಂಡಂತಿದೆ:<br><br>1. **<u>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>** ಈ ಮಂಡಳಿಯ ವತಿಯಿಂದ ಜಾರಿಗೊಳಿಸಲಾಗುತ್ತಿರುವ ಯೋಜನೆಗಳಡಿ ಕಾರವಾರ ಜಿಲ್ಲೆಗೆ ಸಂಬಂಧಿಸಿದಂತೆ ಒಟ್ಟು 58,364 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಹೊಂದಿರುತ್ತಾರೆ.<br><br>2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:** ರಾಜ್ಯದಲ್ಲಿ ಈವರೆಗೆ ಅಸಂಘಟಿತ ಕಾರ್ಮಿಕರ ಸಂಖ್ಯೆಯ ಕುರಿತಂತೆ ಯಾವುದೇ ಗಣತಿ / ಸಮೀಕ್ಷೆ ಕಾರ್ಯ ನಡೆದಿರುವುದಿಲ್ಲ. ಆದ್ದರಿಂದ, ಕಾರವಾರ ಜಿಲ್ಲೆಗೆ ಸಂಬಂಧಿಸಿದಂತೆ, ಅಸಂಘಟಿತ ಕಾರ್ಮಿಕರ ನಿಖರವಾದ ಅಂಕಿಅಂಶಗಳು ಲಭ್ಯವಿರುವುದಿಲ್ಲ.<br><br>2011ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರು ಕೈಗೊಂಡ ಸಾಮಾಜಿಕ, ಆರ್ಥಿಕ ಮತ್ತು ಜಾತಿ ಜನಗಣತಿ ಪ್ರಕಾರ ರಾಜ್ಯದಲ್ಲಿ 1.32 ಕೋಟಿ ಅಸಂಘಟಿತ ಕಾರ್ಮಿಕರು ಇರುವುದಾಗಿ ತಿಳಿದುಬಂದಿದೆ.<br><br>ಆದರೆ, ಮಂಡಳಿಯು ಜಾರಿಗೊಳಿಸುತ್ತಿರುವ ಈ ಕೆಳಕಂಡ ಯೋಜನೆಗಳಲ್ಲಿ ಈವರೆಗೆ ಕಾರವಾರ ಜಿಲ್ಲೆಗೆ ಸಂಬಂಧಿಸಿದಂತೆ ನೋಂದಾಯಿತ ಫಲಾನುಭವಿಗಳ ಸಂಖ್ಯೆ ಈ ಕೆಳಗಿನಂತಿದೆ.<br><br>**<u>1.ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:</u>**<br>ಈ ಯೋಜನೆಯಡಿ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲನಾ ಪರವಾನಗಿ ಹೊಂದಿದ ಚಾಲಕರನ್ನು ಫಲಾನುಭವಿಗಳಾಗಿ ಗುರುತಿಸಿದ್ದು, ಸಾರಿಗೆ ಇಲಾಖೆಯ ದತ್ತಾಂಶದ ಪ್ರಕಾರ ಸಾರಿಗೆ ವಾಹನ ಚಾಲನ ಪರವಾನಗಿ ಹೊಂದಿದ ಚಾಲಕರ ಸಂಖ್ಯೆ: 17,322 ಇರುತ್ತದೆ.<br><br>2. **<u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:</u>** ಈ ಯೋಜನೆಯಡಿ ಅಸಂಘಟಿತ |

ವಲಯಕ್ಕೆ ಸೇರಿದ ಕೆಲವು ವರ್ಗದ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್‌ಕಾರ್ಡ್ ವಿತರಿಸಿಸಲಾಗುತ್ತಿದ್ದು ರಾಯಚೂರು ಜಿಲ್ಲೆಗೆ ಸಂಬಂಧಿಸಿದಂತೆ ಒಟ್ಟು 534 ಕಾರ್ಮಿಕರಿಗೆ ಸ್ಮಾರ್ಟ್‌ಕಾರ್ಡ್ ವಿತರಿಸಲಾಗಿರುತ್ತದೆ.

ಆ) ಅಸಂಘಟಿತ ಕಾರ್ಮಿಕರ ಕ್ಷೇಮಾಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;

ಕಾರ್ಮಿಕರ ಅಭಿವೃದ್ಧಿಗಾಗಿ ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳಡಿ ಸೌಲಭ್ಯಗಳನ್ನು ಅರ್ಹ ಕಾರ್ಮಿಕರಿಗೆ ನೀಡಲಾಗುತ್ತಿದ್ದು ವಿವರ ಕೆಳಕಂಡಂತಿದೆ.

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:** ಈ ಮಂಡಳಿ ವತಿಯಿಂದ ಮಂಡಳಿಯ ಫಲಾನುಭವಿಗಳಾಗಿ ನೋಂದಾಯಿತರಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಹಾಗೂ ಅವರ ಅವಲಂಭಿತರಿಗೆ ಮಂಡಳಿಯ ವತಿಯಿಂದ 15 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದೆ. ವಿವರಗಳನ್ನು **ಅನುಬಂಧ-1**ರಲ್ಲಿ ಒದಗಿಸಿದೆ.

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಅಸಂಘಟಿತ ಕಾರ್ಮಿಕರ ಹಿತರಕ್ಷಣೆಗೆ ಕರ್ನಾಟಕ ರಾಜ್ಯ ಸರ್ಕಾರವು, ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ, 2008ರನ್ವಯ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯನ್ನು ರಚಿಸಿದೆ. ಸದರಿ ಮಂಡಳಿಯು ಅಸಂಘಟಿತ ಕಾರ್ಮಿಕರಿಗಾಗಿ ಈ ಕೆಳಕಂಡ ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸುತ್ತಿದ್ದು, ವಿವರ ಈ ಕೆಳಗಿನಂತಿದೆ.

**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**

**(ಅ) ಅಪಘಾತ ಪರಿಹಾರ ಸೌಲಭ್ಯ:**

- ಈ ಯೋಜನೆಯಡಿ ಖಾಸಗಿ ವಾಣಿಜ್ಯ ವಾಹನ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಅಪಘಾತದಿಂದ ಮರಣ ಹೊಂದಿದಲ್ಲಿ ರೂ.5 ಲಕ್ಷಗಳ ಪರಿಹಾರ ನೀಡಲಾಗುತ್ತಿದೆ.
- ಅಪಘಾತದಿಂದ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷಗಳವರೆಗೆ ಪರಿಹಾರ ಹಾಗೂ
- ತಾತ್ಕಾಲಿಕ ದುರ್ಬಲತೆ / ಆಸ್ಪತ್ರೆ ವೆಚ್ಚದ ಪ್ರಕರಣಗಳಲ್ಲಿ ರೂ.1 ಲಕ್ಷದವರೆಗೆ ಪರಿಹಾರ ನೀಡಲಾಗುತ್ತಿದೆ.

**ಸಾಧನೆ:**

| ಕ್ರ ಸಂ | ವಿವರಣೆ | ಪ್ರಕರಣ | ಪರಿಹಾರದ ಮೊತ್ತ |
|---|---|---|---|
| 1 | ಮರಣ | 382 | ರೂ. 9,58,50,000/- |
| 2 | ಶಾಶ್ವತ ದುರ್ಬಲತೆ | 04 | ರೂ. 3,60,000/- |
| 3 | ಆಸ್ಪತ್ರೆ ವೆಚ್ಚದ ಮರುಪಾವತಿ/ತಾತ್ಕಾಲಿಕ ದುರ್ಬಲತೆ | 126 | ರೂ. 44,42,978/- |
| | **ಒಟ್ಟು** | **512** | **ರೂ. 10,06,52,978/-** |

**(ಆ) ಶೈಕ್ಷಣಿಕ ಧನಸಹಾಯ ಸೌಲಭ್ಯ:** ಅಪಘಾತದಿಂದ ಮರಣ ಹೊಂದಿದ ಹಾಗೂ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ 1ನೇ ತರಗತಿಯಿಂದ 12ನೇ ತರಗತಿ/ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

**ಸಾಧನೆ:**

ಈವರೆಗೆ ಒಟ್ಟು **84** ಫಲಾನುಭವಿ ವಿದ್ಯಾರ್ಥಿಗಳಿಗೆ ರೂ.**8,40,000/-**ಗಳ ಸೌಲಭ್ಯ ನೀಡಲಾಗಿದೆ.

**(ಇ) ಸ್ಮಾರ್ಟ್ ಕಾರ್ಡ್ ಸೌಲಭ್ಯ:** ಯೋಜನೆಯ ಕುರಿತು ಫಲಾನುಭವಿಗಳಲ್ಲಿ ಅರಿವು ಮೂಡಿಸುವ ದೃಷ್ಟಿಯಿಂದ, ಸಾರಿಗೆ ಇಲಾಖೆಯಲ್ಲಿ ಊರ್ಜಿತ ಖಾಸಗಿ ವಾಣಿಜ್ಯ ವಾಹನ ಚಾಲನಾ ಪರವಾನಗಿ ಪಡೆದ ಎಲ್ಲಾ ಖಾಸಗಿ ವಾಣಿಜ್ಯ ವಾಹನ ಚಾಲಕರಿಗೆ ಸ್ಮಾರ್ಟ್ ಕಾರ್ಡ್ ನೀಡಲಾಗುತ್ತಿದೆ.

**ಸಾಧನೆ:**

ಈಗಾಗಲೇ **90,315** ಚಾಲಕರಿಗೆ ಸ್ಮಾರ್ಟ್ ಕಾರ್ಡ್ ವಿತರಿಸಲಾಗಿದ್ದು, ಉಳಿದವರಿಗೆ ಸ್ಮಾರ್ಟ್‌ಕಾರ್ಡ್ ವಿತರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

**(ಈ)ಕಾರ್ಮಿಕ ಸಮ್ಮಾನ ಪುರಸ್ಕಾರ:**

- 2018-19 ಸಾಲಿನಿಂದ, ಸುರಕ್ಷತಾ ಚಾಲನೆಯನ್ನು ಉತ್ತೇಜಿಸುವ ಉದ್ದೇಶದಿಂದ, ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ 60 ಚಾಲಕರಿಗೆ "ಶ್ರಮ ಸಮ್ಮಾನ", 300 ಚಾಲಕರಿಗೆ "ವಿಶೇಷ ಪುರಸ್ಕಾರ" ಹಾಗೂ 1500 ಚಾಲಕರಿಗೆ "ಸಮಾಧಾನಕರ ಪ್ರಶಸ್ತಿ"ಗಳನ್ನು ವಿತರಿಸಲಾಗುತ್ತಿದೆ.
- ಶ್ರಮ ಸಮ್ಮಾನ ಪ್ರಶಸ್ತಿಯು ರೂ.10,000/-ಗಳ ನಗದು ಬಹುಮಾನ, ಸ್ಮರಣಿಕೆ ಹಾಗೂ ಪ್ರಶಂಸಾ ಪತ್ರ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ, ಸ್ಮರಣಿಕೆ ಹಾಗೂ ಪ್ರಶಂಸಾ ಪತ್ರ ಹೊಂದಿದ್ದು, ಸಮಾಧಾನಕರ ಪ್ರಶಸ್ತಿಯು ಸ್ಮರಣಿಕೆ ಹಾಗೂ ಪ್ರಶಂಸಾ ಪತ್ರ ಹೊಂದಿರುತ್ತದೆ.

**ಸಾಧನೆ:**

2018-19ನೇ ಸಾಲಿನಲ್ಲಿ, 2019ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ ಆಯ್ಕೆಗೊಂಡ **60** ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ", **300** ಚಾಲಕರಿಗೆ "ವಿಶೇಷ ಪುರಸ್ಕಾರ" ಹಾಗೂ **1500** ಚಾಲಕರಿಗೆ ಸಮಾಧಾನಕರ ಪ್ರಶಸ್ತಿಗಳನ್ನು ವಿತರಿಸಲಾಗಿದೆ.

**(ಉ) ಅಪಘಾತ ಜೀವರಕ್ಷಕ ಕಾರ್ಯಕ್ರಮ:** 2016-17ನೇ ಸಾಲಿನಿಂದ ಖಾಸಗಿ ವಾಣಿಜ್ಯ ವಾಹನ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ, ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಅಪಘಾತ ಜೀವರಕ್ಷಕರನ್ನಾಗಿ ಸಜ್ಜುಗೊಳಿಸುವ ದೃಷ್ಟಿಯಿಂದ **"ಅಪಘಾತ ಜೀವರಕ್ಷಕ ಕಾರ್ಯಕ್ರಮ"**ವನ್ನು ಪ್ರಾರಂಭಿಸಲಾಗಿದ್ದು, ಯೋಜನೆಯಡಿ ತರಬೇತಿ ಪಡೆದ ಚಾಲಕರಿಗೆ ಸುಸಜ್ಜಿತ ಪ್ರಥಮ ಚಿಕಿತ್ಸಾ ಕಿಟ್ ಹಾಗೂ ತರಬೇತಿ ಪ್ರಮಾಣಪತ್ರವನ್ನು ನೀಡಲಾಗುತ್ತಿದೆ.

| | | |
|---|---|---|
| | | **ಸಾಧನೆ:**<br>2016–2017ನೇ ಸಾಲಿನಲ್ಲಿ **2,701,** 2017–18ನೇ ಸಾಲಿನಲ್ಲಿ **12,176** ಹಾಗೂ 2018–19 ಸಾಲಿನಲ್ಲಿ **11,460** ಚಾಲಕರುಗಳಿಗೆ ಈ ಯೋಜನೆಯಡಿ ಪ್ರಥಮ ಚಿಕಿತ್ಸಾ ತರಬೇತಿ ನೀಡಲಾಗಿದೆ.<br><br>**ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:–**<br><br>**(ಅ) ಸ್ಮಾರ್ಟ್ ಕಾರ್ಡ್ ಸೌಲಭ್ಯ:** ಯೋಜನೆಯಡಿ 11 ವಲಯಗಳ ಅಸಂಘಟಿತ ಕಾರ್ಮಿಕರಾದ ಹಮಾಲರು, ಗೃಹಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು, ಮೆಕ್ಯಾನಿಕ್ಸ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ನೀಡಲಾಗುತ್ತಿದೆ.<br><br>**ಸಾಧನೆ:**<br>ಯೋಜನೆಯಡಿ, ಫಲಾನುಭವಿಗಳನ್ನು ನೋಂದಾಯಿಸಲು 5 ಲಕ್ಷ ನಿಗದಿಪಡಿಸಿದ ಅರ್ಜಿ ನಮೂನೆಗಳನ್ನು ಮುದ್ರಿಸಿ ಉದ್ದೇಶಿತ ವಲಯದ ಕಾರ್ಮಿಕರು, ಸಂಘಗಳು ಹಾಗೂ ಸಂಘಟನೆಗಳಲ್ಲದೆ ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ವಿತರಿಸಲಾಗಿದೆ. ಅವುಗಳಲ್ಲಿ **63,176** ಭರ್ತಿ ಮಾಡಿದ ಅರ್ಜಿ ನಮೂನೆಗಳನ್ನು ಮಂಡಳಿಯು ಸ್ವೀಕರಿಸಿದ್ದು, ಸ್ಮಾರ್ಟ್ ಕಾರ್ಡ್ ಮುದ್ರಿಸಲು ಮೆ॥ ಕಿಯೋನಿಕ್ಸ್ ಸಂಸ್ಥೆಗೆ ನೀಡಲಾಗಿದೆ. ಈಗಾಗಲೇ **25,063** ಸ್ಮಾರ್ಟ್ ಕಾರ್ಡ್‌ಗಳನ್ನು ಕಾರ್ಮಿಕರಿಗೆ ವಿತರಿಸಲಾಗಿದೆ.<br><br>**(ಆ) ಕಾರ್ಮಿಕ ಸಮ್ಮಾನ ಪುರಸ್ಕಾರ:** ಮೇಲಿನ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಪ್ರತಿ ವರ್ಷ ಮಾರ್ಚ್ 01 ರಂದು ನಡೆಯುವ ಕಾರ್ಮಿಕ ಸಮ್ಮಾನ ದಿನಾಚರಣೆಯ ಸಂದರ್ಭದಲ್ಲಿ, ಸದರಿ 11 ವರ್ಗಗಳ 330 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ಹಾಗೂ 3300 ಕಾರ್ಮಿಕರಿಗೆ ವಿಶೇಷ ಪುರಸ್ಕಾರ ನೀಡಿ ಗೌರವಿಸಲಾಗುತ್ತಿದೆ.<br><br>**ಸಾಧನೆ:** 2018–19ನೇ 2019ರ ಮಾರ್ಚ್ 01 ರಂದು ನಡೆದ ಕಾರ್ಮಿಕ ಸಮ್ಮಾನ ದಿನಾಚರಣೆಯ ಸಂದರ್ಭದಲ್ಲಿ ಸದರಿ 11 ವರ್ಗಗಳ 330 ಕಾರ್ಮಿಕರಿಗೆ ಶ್ರಮ ಸಮ್ಮಾನ ಪ್ರಶಸ್ತಿ ಹಾಗೂ 3300 ಕಾರ್ಮಿಕರಿಗೆ ವಿಶೇಷ ಪುರಸ್ಕಾರ ನೀಡಿ ಗೌರವಿಸಲಾಗಿದೆ. |
| ಇ) | ಅಸಂಘಟಿತ ಕಾರ್ಮಿಕರನ್ನು ಯಾವ ಮಾನದಂಡದಲ್ಲಿ ಗುರುತಿಸಲಾಗುವುದು? | ಅಸಂಘಟಿತ ಕಾರ್ಮಿಕರನ್ನು ಗುರುತಿಸಲು ಯಾವುದೇ ನಿರ್ಧಿಷ್ಟ ಮಾನದಂಡಗಳು ಇರುವುದಿಲ್ಲ. ಆದರೆ, ಕಾರ್ಮಿಕ ಇಲಾಖೆ ಅಧೀನದಲ್ಲಿ ಬರುವ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗಳ ಮೂಲಕ ಅಸಂಘಟಿತ ಕಾರ್ಮಿಕರಿಗೆ ಸಂಬಂಧಿಸಿದಂತೆ ಹಲವಾರು ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದ್ದು, ಸದರಿ ಯೋಜನೆಗಳಡಿ ನಿಯಮಾನುಸಾರ ಫಲಾನುಭವಿಗಳಾಗಿ ಅಸಂಘಟಿತ ಕಾರ್ಮಿಕರನ್ನು ನೋಂದಣಿ ಮಾಡಲಾಗುತ್ತಿದ್ದು, ಫಲಾನುಭವಿಗಳಾಗಲು ಇರಬೇಕಾದ ಅರ್ಹತೆಗಳನ್ನು ತಿಳಿಸಲಾಗಿದ್ದು, ಇದಕ್ಕೆ ಸಂಬಂಧಿಸಿದ ವಿವರ ಈ ಕೆಳಕಂಡಂತಿದೆ. |

1. **ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:** ಈ ಮಂಡಳಿಯ ಫಲಾನುಭವಿಯಾಗಿ ನೋಂದಣಿಯಾಗುವ ವರ್ಷದ ಹಿಂದಿನ ವರ್ಷದಲ್ಲಿ ಕನಿಷ್ಠ 90 ದಿನಗಳು ಈ ಕೆಳಗಿನ ಕೆಲಸಗಳಲ್ಲಿ ತೊಡಗಿಸಿಕೊಂಡಿರುವಂತಹ 18 ರಿಂದ 60 ವಯೋಮಾನದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಅರ್ಹರಿರುತ್ತಾರೆ.

1. ನಿರ್ಮಾಣ 2. ಮಾರ್ಪಾಡು 3. ರಿಪೇರಿ 4. ನಿರ್ವಹಣೆ ಅಥವಾ ಕಟ್ಟಡ ಕೆಡವುವಿಕೆಗೆ ಸಂಬಂಧಿಸಿದ ಕಾಮಗಾರಿ 5. ಕಟ್ಟಡಗಳು 6. ಬೀದಿಗಳು 7. ರಸ್ತೆಗಳು 8. ರೈಲ್ವೆಗಳು 9. ಟ್ರಾಮ್‌ವೇಗಳು 10. ಏರ್‌ಫೀಲ್ಡ್ಸ್ 11. ನೀರಾವರಿ ಚ್ಚರಂಡಿ 12. ಏರಿ/ಕಟ್ಟೆಕಟ್ಟುವುದು ಮತ್ತು ನೌಕಾ ಕಾಮಗಾರಿಗಳು 13. ಪ್ರವಾಹ ನಿಯಂತ್ರಣ ಕಾಮಗಾರಿಗಳು (ಮಳೆ ನೀರು, ಚ್ಚರಂಡಿ ಕಾಮಗಾರಿಗಳು ಸೇರಿ) 14. ವಿದ್ಯುತ್ ಉತ್ಪಾದನೆ 15. ಪ್ರಸರಣ ಮತ್ತು ವಿತರಣೆ 16. ಜಲ ಕಾಮಗಾರಿಗಳು (ನೀರು ವಿತರಣಾ ನಾಲೆಗಳು ಸೇರಿ) 17. ತೈಲ ಮತ್ತು ಅನಿಲ ಸ್ಥಾವರಗಳು 18. ವಿದ್ಯುತ್ ಮಾರ್ಗಗಳು 19. ವೈರ್‌ಲೆಸ್ 20. ರೇಡಿಯೋ 21. ದೂರದರ್ಶನ 22. ದೂರವಾಣಿ 23. ದೂರಸಂಪರ್ಕ ಮತ್ತು ಸಮುದ್ರ ಸಂವಹನಗಳಿಗೆ ಸಂಬಂಧಿಸಿದ ನಿರ್ಮಾಣ/ನವೀಕರಣ ಮತ್ತು ದುರಸ್ತಿ 24. ಅಣೆಕಟ್ಟುಗಳು 25. ನಾಲೆಗಳು 26. ಜಲಾಶಯಗಳು 27. ಜಲ ಮೂಲಗಳು 28. ಸುರಂಗಗಳು 29. ಸೇತುವೆಗಳು 30. ವಯಾಡಕ್ಟ್ಸ್ 31. ಆಕ್ವೆಡಕ್ಟ್ಸ್ 32. ಕೊಳವೆ ಮಾರ್ಗಗಳ ನಿರ್ಮಾಣ 33. ಸ್ಥಾವರಗಳು 34. ಕೂಲಿಂಗ್ ಟವರ್‌ಗಳು ಮತ್ತು ಪ್ರಸರಣ ಸ್ಥಾವರಗಳು **ಹೆಚ್ಚುವರಿ ನಿರ್ಮಾಣ ಕೆಲಸಗಳು:**
35.ಕಲ್ಲು ಗಣಿಗಾರಿಕೆ ಕಾಯ್ದೆ 1952ರ ವ್ಯಾಪ್ತಿಗೆ ಒಳಪಡದ ರಸ್ತೆ ಮತ್ತು ಕಟ್ಟಡ ನಿರ್ಮಾಣದ ಕಲ್ಲು ಕೆಲಸ 36. ನಿರ್ಮಾಣದಲ್ಲಿ ಚಪ್ಪಡಿ/ಟೈಲ್‌ಗಳನ್ನು ಅಳವಡಿಸುವುದು 37. ಯುಜಿಡಿ ನಿರ್ಮಾಣ ಸ್ಥೆರಿದಂತೆ ಒಳಚರಂಡಿ ಮತ್ತು ಪ್ಲಂಬಿಂಗ್ ಕೆಲಸ 38. ವೈರಿಂಗ್, ವಿತರಣೆ ಪ್ಯಾನಲ್ ಫಿಕ್ಸಿಂಗ್ ಇತ್ಯಾದಿಗಳನ್ನು ಒಳಗೊಂಡ ವಿದ್ಯುತ್ ಕೆಲಸ 39. ಕೂಲಿಂಗ್ ಮತ್ತು ಹೀಟಿಂಗ್ ಸಿಸ್ಟಂಗಳ ಸ್ಥಾಪನೆ ಮತ್ತು ಅಳವಡಿಕೆ 40. ಲಿಫ್ಟ್, ಎಸ್ಕಲೇಟರ್ ಇತ್ಯಾದಿಗಳ ಸ್ಥಾಪನೆ 41. ಸೆಕ್ಯೂರಿಟಿ ಗೇಟಗಳ ಸ್ಥಾಪನೆ 42. ಕಬ್ಬಿಣ/ಲೋಹದ ಗ್ರಿಲ್‌ಗಳು, ಕಿಟಕಿ, ಬಾಗಿಲುಗಳ ಸ್ಥಾಪನೆ 43. ನೀರಿನ ಕೊಯ್ಲು ರಚನೆಗಳ ನಿರ್ಮಾಣ 44. ಫ್ಲೋರಿಂಗ್, ಫಾಲ್ಸ್‌ಸೀಲಿಂಗ್, ವಾಲ್ ಪ್ಯಾನಲಿಂಗ್ ಮುಂತಾದವುಗಳನ್ನು ಒಳಗೊಂಡ ಒಳಾಂಗಣ ವಿನ್ಯಾಸ 45. ಕಟ್ಟಡ ನಿರ್ಮಾಣ ಸಂದರ್ಭದಲ್ಲಿ ಅಳವಡಿಸುವ ಗ್ಲಾಸ್ ಪ್ಯಾನಲ್‌ಗಳು, ಎಸಿಪಿ ಶೀಟ್‌ಗಳು, ಸ್ಪೈಡರ್ ಗ್ಲೇಜಿಂಗ್‌ಗಳು 46.ಪ್ರೀ-ಫ್ಯಾಬ್ರಿಕೇಟೆಡ್ ಕಾಂಕ್ರೀಟ್ ಮಾಡ್ಯೂಲ್ಸ್, ಕಾಂಕ್ರೀಟ್ ಬ್ರಿಕ್ಸ್, ಬ್ಲಾಕ್ಸ್, ಹಾಲೋಬ್ಲಾಕ್ಸ್, ಟೈಲ್ಸ್ ಮುಂತಾದವುಗಳ ಅಳವಡಿಕೆ 47.ಸಿಗ್ನೇಜ್, ರಸ್ತೆ ಪೀಠೋಪಕರಣಗಳು, ಬಸ್ ಆಶ್ರಯಗಳು/ ಸ್ಟ್ಯಾಂಡ್, ಸಿಗ್ನಲಿಂಗ್ ಸಿಸ್ಟಮ್ಸ್ ಮುಂತಾದವುಗಳ ನಿರ್ಮಾಣ 48.ರೋಟರಿಗಳ ನಿರ್ಮಾಣ ಮತ್ತು ಸ್ಥಾಪನೆ, ಕಾರಂಜಿಗಳು, ಸಾರ್ವಜನಿಕ ಉದ್ಯಾನವನ ಮತ್ತು ತೋಟಗಳಲ್ಲಿ ಈಜುಕೊಳಗಳು ಇತ್ಯಾದಿಗಳ ಅಳವಡಿಕೆ 49. ನಿರ್ಮಾಣ ಉದ್ದೇಶಗಳಿಗಾಗಿ ಭೂಮಿಯ ಕೆಲಸ, ಭೂಮಿಯ ಹರಡುವಿಕೆ, ನೆಲಸಮಗೊಳಿಸುವಿಕೆ ಮತ್ತು ಭೂಮಿಯ ಕತ್ತರಿಸುವಿಕೆ ಇತ್ಯಾದಿ ಕೆಲಸಗಳು 50. ತಾತ್ಕಾಲಿಕ ಆಶ್ರಯ ತಾಣಗಳ ನಿರ್ಮಾಣ ಮತ್ತು ಅಳವಡಿಕೆ 51. ಫಿಲಂಸೆಟ್ ಗಳ ನಿರ್ಮಾಣ ಮತ್ತು ಅಳವಡಿಕೆ.

2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:** ಈ ಮಂಡಳಿಯ ಯೋಜನೆಗಳಡಿ ಫಲಾನುಭವಿಗಳಾಗಲು ಈ ಕೆಳಕಂಡ ಮಾನದಂಡಗಳನ್ನು ಅಳವಡಿಸಿ ಅಸಂಘಟಿತ ಕಾರ್ಮಿಕರನ್ನು ಗುರುತಿಸಲಾಗುತ್ತಿದೆ:-

ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008 ರ ಕಲಂ 2(ಎಂ) ರನ್ವಯ "ಅಸಂಘಟಿತ ಕೆಲಸಗಾರ" ಎಂದರೆ, ಗೃಹ ಆಧಾರಿತ ಕೆಲಸಗಾರ, ಸ್ವಯಂ ನಿಯೋಜಿತ ಕೆಲಸಗಾರ ಅಥವಾ ಅಸಂಘಟಿತ ವಲಯದ ಒಬ್ಬ ಮಜೂರಿ ಕೆಲಸಗಾರ ಮತ್ತು ಈ ಅಧಿನಿಯಮದ ಅನುಸೂಚಿ- IIರಲ್ಲಿ ನಮೂದಿಸಿದ ಯಾವುವೇ ಅಧಿನಿಯಮಗಳಿಗೆ

ಒಳಪಟ್ಟಿರದ ಸಂಘಟಿತ ವಲಯದಲ್ಲಿನ ಕೆಲಸಗಾರನನ್ನು ಒಳಗೊಳ್ಳುತ್ತದೆ;

**ಅನುಸೂಚಿ-II**

**[2 (ಎಂ) ಪ್ರಕರಣವನ್ನು ನೋಡಿ]**

| ಕ್ರಮ ಸಂಖ್ಯೆ | ಅಧಿನಿಯಮದ ಹೆಸರು |
|---|---|
| 1. | ಕಾರ್ಮಿಕ ನಷ್ಟ ಪರಿಹಾರ ಅಧಿನಿಯಮ, 1923 (1923ರ 8) |
| 2. | ಕೈಗಾರಿಕಾ ವಿವಾದಗಳ ಅಧಿನಿಯಮ, 1947 (1947ರ 14) |
| 3. | ನಿಯೋಜಿತರ ರಾಜ್ಯ ವಿಮಾ ಅಧಿನಿಯಮ, 1948 (1948ರ 34) |
| 4. | ನೌಕರರ ಭವಿಷ್ಯ ನಿಧಿಗಳ ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1952 (1952ರ 19) |
| 5. | ಪ್ರಸೂತಿ ಸೌಕರ್ಯ ಅಧಿನಿಯಮ, 1961 (1961ರ 53) |
| 6. | ಉಪದಾನ ಸಂದಾಯ ಅಧಿನಿಯಮ, 1972 (1972ರ 39). |

ಮತ್ತು ಕಲಂ 2(ಎನ್)ರನ್ವಯ "ಮಜೂರಿ ಕೆಲಸಗಾರ" ಎಂದರೆ, ಒಬ್ಬನೇ ನಿಯೋಜಕನಿಗಾಗಿಯಾಗಲಿ ಅಥವಾ ಒಬ್ಬ ಅಥವಾ ಹೆಚ್ಚು ನಿಯೋಜಕರಿಗಾಗಿಯಾಗಲಿ, ನಗದು ರೂಪದಲ್ಲಾಗಲಿ ಅಥವಾ ವಸ್ತು ರೂಪದಲ್ಲಾಗಲಿ ಕೇಂದ್ರ ಸರ್ಕಾರವು ಅಥವಾ ಸಂದರ್ಭಾನುಸಾರ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂತೆ ಮಾಸಿಕ ಮಜೂರಿ ಮೊಬಲಗಿನ ಮೇಲೆ, ಒಬ್ಬ ಗೃಹ ಆಧಾರಿತ ಕೆಲಸಗಾರನಾಗಿಯಾಗಲಿ ಅಥವಾ ಒಬ್ಬ ತಾತ್ಕಾಲಿಕ ಅಥವಾ ಸಾಂದರ್ಭಿಕ ಕೆಲಸಗಾರನಾಗಿಯಾಗಲಿ, ಅಥವಾ ಒಬ್ಬ ವಲಸೆ ಕೆಲಸಗಾರನಾಗಿಯಾಗಲಿ, ಅಥವಾ ಮನೆ ಕೆಲಸದವರೂ ಒಳಗೊಂಡಂತೆ, ಕುಟುಂಬದವರಿಂದ ನಿಯೋಜಿತರಾದ ಕೆಲಸಗಾರರಾಗಿಯಾಗಲಿ, ಕೆಲಸದ ಸ್ಥಳ ಯಾವುದೇ ಇದ್ದರೂ, ಅಸಂಘಟಿತ ವಲಯದಲ್ಲಿ ಪರಿಶ್ರಮಧನದ ಸಂದಾಯದ ಮೇಲೆ, ಒಬ್ಬ ನಿಯೋಜಕನಿಂದ ನೇರವಾಗಿ ಅಥವಾ ಯಾರೇ ಗುತ್ತಿಗೆದಾರನ ಮೂಲಕ ನಿಯೋಜಿತನಾದ ವ್ಯಕ್ತಿ.

ಹಾಗೂ ಕಲಂ 2(ಕೆ)ರನ್ವಯ "ಸ್ವಯಂ – ನಿಯೋಜಿತ ಕೆಲಸಗಾರ" ಎಂದರೆ, ಒಬ್ಬ ನಿಯೋಜಕನಿಂದ ನಿಯೋಜಿತನಾಗಿರದ, ಆದರೆ, ಕಾಲಕಾಲಕ್ಕೆ ಕೇಂದ್ರ ಸರ್ಕಾರವು ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂತೆ ಒಂದು ಮೊತ್ತದ ಮಾಸಿಕ ಗಳಿಕೆಗೆ ಒಳಪಟ್ಟು ಅಸಂಘಟಿತ ವಲಯದಲ್ಲಿ ಯಾವುದೇ ಉದ್ಯೋಗದಲ್ಲಿ ಸ್ವತಃ ತನ್ನನ್ನು ತೊಡಗಿಸಿಕೊಂಡಿರುವ ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂತೆ ಅಂಥ ಗರಿಷ್ಠ ಪರಿಮಿತಿಗೊಳಪಟ್ಟು ಸಾಗುವಳಿ ಭೂಮಿಯನ್ನು ಹೊಂದಿರುವ ಯಾರೇ ವ್ಯಕ್ತಿ; ಇದಲ್ಲದೇ,

ಸದರಿ ಕಾಯ್ದೆಯ ಕಲಂ 2(ಎಲ್)ರನ್ವಯ "ಅಸಂಘಟಿತ ವಲಯ" ಎಂದರೆ, ವ್ಯಕ್ತಿಗಳ ಅಥವಾ ಸ್ವಯಂ ನಿಯೋಜಿತ ಕೆಲಸಗಾರರ ಒಡೆತನದಲ್ಲಿರುವ ಹಾಗೂ ಉತ್ಪಾದನೆಯಲ್ಲಿ ಅಥವಾ ಸರಕುಗಳ ಮಾರಾಟದಲ್ಲಿ ನಿರತವಾಗಿರುವ ಅಥವಾ ಇತರ ಯಾವುದೇ ಬಗೆಯ ಸೇವೆಯನ್ನು ಒದಗಿಸುತ್ತಿರುವ ಮತ್ತು ಉದ್ಯಮವು ಕೆಲಸಗಾರರನ್ನು ನಿಯೋಜಿಸಿಕೊಂಡಿದ್ದರೆ, ಅಂಥ ಕೆಲಸಗಾರರ ಸಂಖ್ಯೆಯು 10 ಕ್ಕಿಂತ ಕಡಿಮೆ ಇರುವ ಒಂದು ಉದ್ದಿಮೆ; ಆಗಿರುತ್ತದೆ. ಮೇಲ್ಕಂಡ ಮಾರ್ಗಸೂಚಿಗಳನ್ವಯ ಪ್ರಸ್ತುತ ಕರ್ನಾಟಕ ರಾಜ್ಯ ಸರ್ಕಾರವು 43ವಲಯಗಳ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಿದ್ದು ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ.

ಸಂಖ್ಯೆ: **ಇ-ಕಾಇ 40 ಎಲ್‌ಇಟಿ 2019**

# ಅನುಬಂಧ-1

## ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಫಲಾನುಭವಿಗಳಿಗೆ ದೊರೆಯುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.1,000/-
2. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.1,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/-ದವರೆಗೆ ಅನುಗ್ರಹ ರಾಶಿ ಸಹಾಯಧನ.
3. ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.20,000/-ವರೆಗೆ
4. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-ದವರೆಗೆ ಮುಂಗಡ ಸೌಲಭ್ಯ
5. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
6. ಅಂತ್ಯಕ್ರಿಯೆ ವೆಚ್ಚ: ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
7. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:
   - i) 1, 2 ಹಾಗೂ 3ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ ರೂ. 2,000/-
   - ii) 4, 5 ಹಾಗೂ 6ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ ರೂ. 3,000/-
   - iii) 7 ಹಾಗೂ 8ನೇ ತರಗತಿ ಉತ್ತೀರ್ಣರಾದವರಿಗೆ ರೂ. 4,000/-
   - iv) 9, 10 ನೇ ತರಗತಿ ಹಾಗೂ ಪ್ರಥಮ ಪಿಯುಸಿ ಉತ್ತೀರ್ಣರಾದವರಿಗೆ 6,000/-
   - v) ದ್ವಿತೀಯ ಪಿಯು.ಸಿ ಉತ್ತೀರ್ಣರಾದವರಿಗೆ ರೂ. 8,000/-
   - vi) ಐಟಿಐ ಮತ್ತು ಡಿಪ್ಲೋಮಾ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ ರೂ. 7,000/-
   - vii) ಪದವಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ ರೂ. 10,000/-
   - viii) ಸ್ನಾತಕೋತ್ತರ ಪದವಿ ಸೇರ್ಪಡೆಗೆ ರೂ. 20,000/- ಹಾಗೂ ಪ್ರತಿ ವರ್ಷ ರೂ.10,000/-ಗಳಂತೆ (ಎರಡು ವರ್ಷಗಳಿಗೆ)
   - ix) ಇಂಜಿನಿಯರಿಂಗ್ ಕೋರ್ಸ್‌ಗೆ ಸೇರ್ಪಡೆಗೆ ರೂ.25,000/- ಹಾಗೂ ಪ್ರತಿ ವರ್ಷ ತೇರ್ಗಡೆಗೆ ರೂ.20,000/-
   - x) ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ ರೂ.30,000/- ಹಾಗೂ ಪ್ರತಿ ವರ್ಷ ತೇರ್ಗಡೆಗೆ ರೂ.25,000/-
   - xi) ಪಿಹೆಚ್‌ಡಿ ಕೋರ್ಸ್‌ಗೆ ಪ್ರತಿ ವರ್ಷಕ್ಕೆ ರೂ.20,000/- (ಗರಿಷ್ಠ ಎರಡು ವರ್ಷಗಳು) ಮತ್ತು ಪಿಹೆಚ್‌ಡಿ ಪ್ರಬಂಧ ಸ್ವೀಕಾರದ ನಂತರ ಹೆಚ್ಚುವರಿಯಾಗಿ ರೂ.20,000/-

ಪ್ರತಿಭಾವಂತ ಮಕ್ಕಳಿಗಾಗಿ:

- (a) ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ ರೂ.5,000/-
- (b) ಪಿಯುಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ ರೂ.7,000/-
- (c) ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ ರೂ.10,000/-
- (d) ಸ್ನಾತಕೋತ್ತರ ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ ರೂ.15,000/-

8. ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ ರೂ.300/- ರಿಂದ ರೂ.10,000/-ವರೆಗೆ
9. ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-
10. ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ): ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೋಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ ರೂ.2,00,000/-ವರೆಗೆ
11. ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್): ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.50,000/-
12. LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ): ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
13. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
14. ಕೆಎಸ್ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ: ರಾಜ್ಯಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ
15. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಟಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/-ಗಳ ಸಹಾಯಧನ

## ಅನುಬಂಧ-2

1. ದರ್ಜಿಗಳು
2. ದೋಬಿಗಳು
3. ಹಮಾಲಿಗಳು
4. ಹೋಟೆಲ್ ಕಾರ್ಮಿಕರು
5. ಆಟೋ ಮತ್ತು ಟ್ಯಾಕ್ಸಿ ಚಾಲಕರು ಹಾಗೂ ಖಾಸಗಿ ಬಸ್, ಲಾರಿ ಚಾಲಕರು ಹಾಗೂ ನಿರ್ವಾಹಕರು
6. ಆಟೋಮೊಬೈಲ್ ವರ್ಕ್‌ಶಾಪ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಮತ್ತು
7. ಗೃಹ ಕಾರ್ಮಿಕರು
8. ಕೃಷಿ/ತೋಟಗಾರಿಕೆ/ಹೈನುಗಾರಿಕೆ ಕೆಲಸಗಳಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
9. ನಾರಿನ ಉದ್ದಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
10. ಮನೆಗಳಲ್ಲಿ ನೇಯ್ಗೆ ಕೆಲಸ ಮಾಡುವ ನೇಕಾರರು
11. ಮೀನುಗಾರರು
12. ಕುಂಬಾರರು
13. ಚಮ್ಮಾರರು
14. ಕ್ಷೌರಿಕರು
15. ಕಸಾಯಿ ಖಾನೆ ಕಾರ್ಮಿಕರು
16. ಕಮ್ಮಾರರು
17. ಚಿನಿವಾರರು/ಅಕ್ಕಸಾಲಿಗರು
18. ಮನೆಗಳಲ್ಲಿ ಬೀಡಿ ಕಟ್ಟುವವರು
19. ಮನೆಗಳಲ್ಲಿ ಅಗರಬತ್ತಿ ತಯಾರಿಸುವ ಕಾರ್ಮಿಕರು
20. ಶಿಲ್ಪಕಾರರು/ ಹಸ್ತ ಕುಶಲ ಕಾರ್ಮಿಕರು
21. ಚಿತ್ರ ಬಿಡಿಸುವವರು
22. ಬಿದಿರಿನ ವಸ್ತುಗಳನ್ನು ತಯಾರು ಮಾಡುವವರು
23. ಖಾದ್ಯ ತೈಲ/ಮನೆಯಲ್ಲಿ ಆಹಾರ ವಸ್ತುಗಳ ಸಂಸ್ಕರಣೆ ಕೆಲಸದಲ್ಲಿ ತೊಡಗಿರುವವರು.
24. ಟಿಂಬರ್ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
25. ರೇಷ್ಮೆ ಕಾರ್ಮಿಕರು
26. ಕಾಟನ್ ಗಿನ್ನಿಂಗ್ ಮತ್ತು ಪ್ರೊಸೆಸಿಂಗ್ ಕೆಲಸದಲ್ಲಿ ತೊಡಗಿರುವಕಾರ್ಮಿಕರು
27. ಮುದ್ರಣ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
28. ಕಲ್ಲು ಒಡೆಯುವಕಾರ್ಮಿಕರು
29. ಚರ್ಮ ಹದ ಮಾಡುವ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
30. ಎಲ್ಲಾ ವಿಧದ ಮಿಲ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು
31. ಬೀದಿ ಬದಿಯ ಮಾರಟಗಾರರು
32. ಚಾಲಕರು/ನಿರ್ವಾಹಕರು/ಸಹಾಯಕರು/ ಕ್ಲೀನರ್‌ಗಳು/ಗಾಡಿ ಎಳೆಯುವವರು/ರಿಕ್ಷಾ ವಾಲಾಗಳು/ ಟಾಂಗಾವಾಲಾಗಳು.
33. ಎಲ್ಲಾ ಬಗೆಯ ರಿಪೇರಿ ಕೆಲಸ ಮತ್ತು ತ್ಯಾಜ್ಯ ವಿಲೇವಾರಿ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
34. ಚಿಂದಿ ಆಯುವವರು
35. ಅಡಿಗೆ ಕೆಲಸಗಾರರು/ಕಲ್ಯಾಣ ಮಂಟಪಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವವರು/ಮಧ್ಯಾಹ್ನದ ಬಿಸಿ ಊಟದ ಕಾರ್ಮಿಕರು ಮತ್ತು ಸಹಾಯಕರು
36. ಸಫಾಯಿ ಕರ್ಮಚಾರಿಗಳು
37. ಕಛೇರಿಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವ ಗುತ್ತಿಗೆ ಕಾರ್ಮಿಕರು
38. ಗುತ್ತಿಗೆ ಆಧಾರದ ಮೇಲೆ ನೇಮಕವಾಗಿರುವ ಭದ್ರತಾ ಸಿಬ್ಬಂದಿ/ವಾಚ್‌ಮೆನ್‌ಗಳು
39. ಪೋರ್ಟರ್
40. ಪ್ರವಾಸಿ ಗೈಡ್‌ಗಳು
41. ಮಂಡಕ್ಕಿ ಭಟ್ಟಿ ಕಾರ್ಮಿಕರು
42. ಛಾಯಾವೃತ್ತಿ ಕಾರ್ಮಿಕರು
43. ಇತರೆ ವರ್ಗ(ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು)